# ಮಧ್ವನಾಮ

ಜಯ ಜಯ ಜಗತ್ರಾಣ ಜಗದೊಳಗೆ ಸ(ಸು)ತ್ರಾಣ

ಅಖಿಲಗುಣ ಸದ್ಧಾಮ ಮಧ್ವನಾಮ || ಪ ||

ಆವ ಕಚ್ಛಪ ರೂಪದಿಂದಲಂಡೋದಕವ

ಓವಿ ಧರಿಸಿದ ಶೇಷಮೂರ್ತಿಯನು

ಆವವನ ಬಳಿವಿಡಿದು ಹರಿಯ ಸುರರೈಯ್ದುವರು

ಆ ವಾಯು ನಮ್ಮ ಕುಲಗುರುರಾಯನು || ೧ ||

ಆವವನು ದೇಹದೊಳಗಿರಲು ಹರಿ ನೆಲಸಿಹನು

ಆವವನು ತೊಲಗೆ ಹರಿ ತಾ ತೊಲಗುವ

ಆವವನು ದೇಹದಾ ಒಳ ಹೊರಗೆ ನಿಯಾಮಕನು

ಆ ವಾಯು ನಮ್ಮ ಕುಲಗುರುರಾಯನು || ೨ ||

ಕರುಣಾಭಿಮಾನಿ ಸುರರು ದೇಹವ ಬಿಡಲು

ಕುರುಡ ಕಿವುಡ ಮೂಕನೆಂದೆನಿಸುವ

ಪರಮ ಮುಖ್ಯಪ್ರಾಣ ತೊಲಗಲಾ ದೇಹವನು

ಅರಿತು ಪೆಣವೆಂದು ಪೇಳುವರು ಬುಧಜನ || ೩ ||

ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ

ಪರತರನೆನಿಸಿ ನಿಯಾಮಿಸಿ ನೆಲಸಿಹ

ಹರಿಯನಲ್ಲದೆ ಬಗೆಯ ಅನ್ಯರನು ಲೋಕದೊಳು

ಗುರುಕುಲತಿಲಕ ಮುಖ್ಯ ಪವಮಾನನು || ೪ ||

ತ್ರೇತೆಯಲಿ ರಘುಪತಿಯ ಸೇವೆ ಮಾಡುವೆನೆಂದು

ವಾತಸುತ ಹನುಮಂತನೆಂದೆನಿಸಿದ

ಪೋತ ಭಾವದಿ ತರಣಿ ಬಿಂಬಕ್ಕೆ ಲಂಘಿಸಿದ

ಈತಗೆಣೆಯಾರು ಮೂಲೋಕದೊಳಗೆ || ೫ ||

ತರಣಿಗಭಿಮುಖನಾಗಿ ಶಬ್ದಶಾಸ್ತ್ರವ ಪಠಿಸಿ

ಉರವಣಿಸಿ ಹಿಂದುಮುಂದಾಗಿ ನಡೆದ

ಪರಮ ಪವಮಾನ ಸುತ ಉದಯಾಸ್ತ ಶೈಲಗಳ

ಭಯದಿಯ್ಯೈದಿದಗೀತಗುಪಮೆ ಉಂಟೇ || ೬ ||

ಅಖಿಲ ವೇದಗಳ ಸಾರ ಪಠಿಸಿದನು ಮುನ್ನಲ್ಲಿ

ನಿಖಿಳ ವ್ಯಾಕರಣಗಳ ಇವ ಪೇಳಿದ

ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲೆಂದು

ಮುಖ್ಯಪ್ರಾಣನನು ರಾಮನನುಕರಿಸಿದ || ೭ ||

ತರಣಿಸುತನನು ಕಾಯ್ದು ಶರಧಿಯನು ನೆರೆದಾಟಿ

ಧರಣಿಸುತೆಯಳ ಕಂಡು ದನುಜರೊಡನೆ

ಭರದಿ ರಣವನೆ ಮಾಡಿ ಗೆಲಿದು ದಿವ್ಯಾಸ್ತ್ರಗಳ

ಉರುಹಿ ಲಂಕೆಯ ಬಂದ ಹನುಮಂತನು || ೮ ||

ಹರಿಗೆ ಚೂಡಾಮಣಿಯನಿತ್ತು ಹರಿಗಳ ಕೂಡಿ

ಶರಧಿಯನು ಕಟ್ಟಿ ಬಲು ರಕ್ಕಸರನು



ಒರಸಿ ರಣದಲಿ ದಶಶಿರನ ಹುಡಿಗುಟ್ಟಿದ

ಮೆರೆದ ಹನುಮಂತ ಬಲವಂತ ಧೀರ || ೯ ||

ಉರಗಬಂಧಕೆ ಸಿಲುಕಿ ಕಪಿವರರು ಮೈಮರೆಯೆ

ತರಣಿಕುಲತಿಲಕನಾಜ್ಞೆಯ ತಾಳಿದ

ಗಿರಿಹಸಿತ ಸಂಜೀವನವ ಕಿತ್ತು ತಂದಿತ್ತ

ಹರಿವರಗೆ ಸರಿಯುಂಟೆ ಹನುಮಂತಗೆ || ೧೦ ||

ವಿಜಯ ರಘುಪತಿ ಮೆಚ್ಚಿ ಧರಣಿಸುತೆಯಳಿಗೀಯೆ

ಭಜಿಸಿ ಮೌಕ್ತಿಕದ ಹಾರವನು ಪಡೆದ

ಅಜಪದವಿಯನು ರಾಮ ಕೊಡುವೆನೆನೆ ಹನುಮಂತ

ನಿಜಭಕುತಿಯನೆ ಬೇಡಿ ವರವ ಪಡೆದ || ೧೧ ||

ಆ ಮಾರುತನೆ ಭೀಮನೆನಿಸಿ ದ್ವಾಪರದಲ್ಲಿ

ಸೋಮಕುಲದಲಿ ಜನಿಸಿ ಪಾರ್ಥನೊಡನೆ

ಭೀಮ ವಿಕ್ರಮ ರಕ್ಕಸರ ಮುರಿದೊಟ್ಟಿದ

ಆ ಮಹಿಮ ನಮ್ಮ ಕುಲಗುರುರಾಯನು || ೧೨ ||

ಕರದಿಂದ ಶಿಶುಭಾವನಾದ ಭೀಮನ ಬಿಡಲು

ಗಿರಿವಡದು ಶತಶೃಂಗವೆಂದೆನಿಸಿತು

ಹರಿಗಳ ಹರಿಗಳಿಂ ಕರಿಗಳ ಕರಿಗಳಿಂ

ಅರೆವ ವೀರನಿಗೆ ಸುರ ನರನುಸರಿಯೇ || ೧೩ ||

ಕುರುಪ ಗರಳವನಿಕ್ಕೆ ನೆರೆ ಉಂಡು ತೇಗಿ

ಹಸಿದುರಗಗಳ ಮ್ಯಾಲೆ ಬಿಡಲದನೊರಸಿದ

ಅರಗಿನರಮನೆಯಲ್ಲಿ ಉರಿಯನಿಕ್ಕಲು ವೀರ

ಧರಿಸಿ ಜಾಹ್ನವಿಗೊಯ್ದ ತನ್ನನುಜರ || ೧೪ ||

ಅಲ್ಲಿರ್ದ ಬಕ ಹಿಡಿಂಬಕೆರೆಂಬ ರಕ್ಕಸರ

ಇಲ್ಲದೊರಸಿದ ಲೋಕಕಂಟಕರನು

ಬಲ್ಲಿದಸುರರ ಗೆಲಿದು ದ್ರೌಪದಿಯ ಕೈವಿಡಿದು

ಎಲ್ಲ ಸುಜನರಿಗೆ ಹರುಷವ ತೋರಿದ || ೧೫ ||

ರಾಜಕುಲ ವಜ್ರನೆನಿಸಿದ ಮಾಗಧನ ಸೀಳಿ

ರಾಜಸೂಯಯಾಗವನು ಮಾಡಿಸಿದನು

ಆಜಿಯೊಳು ಕೌರವರ ಬಲವ ಸವರುವೆನೆಂದು

ಮೂಜಗವರಿಯೆ ಕಂಕಣ ಕಟ್ಟಿದ || ೧೬ ||

ದಾನವರ ಸವರಬೇಕೆಂದು ಬ್ಯಾಗ

ಮಾನನಿಧಿ ದ್ರೌಪದಿಯ ಮನದಿಂಗಿತವನರಿತು

ಕಾನನವ ಪೊಕ್ಕು ಕಿಮಾರಾದಿಗಳ ಮುರಿದು

ಮಾನಿನಿಗೆ ಸೌಗಂಧಿಕವನೆ ತಂದ || ೧೭ ||

ದುರುಳ ಕೀಚಕನು ತಾ ದ್ರೌಪದಿಯ ಚೆಲುವಿಕೆಗೆ

ಮರುಳಾಗಿ ಕರಕರಿಯ ಮಾಡಲವನಾ

ಗರಡಿ ಮನೆಯಲಿ ಬರಸಿ ಅವನನ್ವಯವ

ಕುರುಪನಟ್ಟಿದ ಮಲ್ಲಕುಲವ ಸವೆದ || ೧೮ ||

ಕೌರವರ ಬಲ ಸವರಿ ವೈರಿಗಳ ನೆಗ್ಗೊತ್ತಿ

ಓರಂತೆ ಕೌರವನ ಮುರಿದು ಮೆರೆದ

ವೈರಿ ದುಶ್ಯಾಸನ್ನ ರಣದಲ್ಲಿ ಎಡೆಗೆಡಹಿ

ವೀರ ನರಹರಿಯ ಲೀಲೆಯ ತೋರಿದ || ೧೯ ||

ಗುರುಸುತನು ಸಂಗರದಿ ನಾರಾಯಣಾಸ್ತ್ರವನು

ಉರವಣಿಸಿ ಬಿಡಲು ಶಸ್ತ್ರವ ಬಿಸುಟರು

ಹರಿಕೃಪೆಯ ಪಡೆದಿರ್ದ ಭೀಮ ಹುಂಕಾರದಿಂ

ಹರಿಯ ದಿವ್ಯಾಸ್ತ್ರವನು ನೆರೆ ಅಟ್ಟಿದ || ೨೦ ||

ಚಂಡ ವಿಕ್ರಮನು ಗೆದೆಗೊಂಡು ರಣದಿ ಭೂ

ಮಂಡಲದೊಳಿದಿರಾಂತ ಖಲರನೆಲ್ಲಾ

ಹಿಂಡಿ ಬಿಸುಟಿಹ ವೃಕೋದರರನ ಪ್ರತಾಪವನು

ಕಂಡು ನಿಲ್ಲುವರಾರು ತ್ರಿಭುವನದೊಳು || ೧೦ ||

ದಾನವರು ಕಲಿಯುಗದೊಳವತರಿಸಿ ವಿಬುಧರೊಳು

ವೇನನ ಮತವನರುಹಲದನರಿತು

ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ

ಮಾನನಿಧಿ ಮಧ್ವಾಖ್ಯನೆಂದೆನಿಸಿದ || ೧೧ ||

ಅರ್ಭಕತನದೊಳೈದಿ ಬದರಿಯಲಿ ಮಧ್ವಮುನಿ

ನಿರ್ಭಯದಿ ಸಕಳ ಶಾಸ್ತ್ರವ ಪಠಿಸಿದ

ಉರ್ವಿಯೊಳು ಮಾಯೆ ಬೀರಲು ತತ್ತ್ವಮಾರ್ಗವನು

ಓರ್ವ ಮಧ್ವಮುನಿ ತೋರ್ದ ಸುಜನರ್ಗೆ || ೧೨ ||

ಸರ್ವೇಶ ಹರಿ ವಿಶ್ವ ಎಲ್ಲ ತಾ ಪುಸಿಯೆಂಬ

ದುರ್ವಾದಿಗಳ ಮತವ ನೆರೆ ಖಂಡಿಸಿ

ಸರ್ವೇಶ ಹರಿ ವಿಶ್ವ ಸತ್ಯವೆಂದರುಹಿದಾ

ಶರ್ವಾದಿ ಗೀರ್ವಾಣ ಸಂತತಿಯಲಿ || ೧೪ ||

ಬದರಿಕಾಶ್ರಮಕೆ ಪುನರಪಿಯೈದಿ ವ್ಯಾಸಮುನಿ

ಪದಕೆರಗಿ ಅಖಿಳ ವೇದಾರ್ಥಗಳನು

ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವ

ಯೈದಿದ ಮಧ್ವಮುನಿರಾಯಗಭಿವಂದಿಪೆ || ೧೫ ||

ಜಯ ಜಯತು ದುರ್ವಾದಿಮತತಿಮಿರ ಮಾರ್ತಾಂಡ

ಜಯಜಯತು ವಾದಿಗಜಪಂಚಾನನ

ಜಯಜಯತು ಚಾರ್ವಾಕಗರ್ವಪರ್ವತಕುಲಿಶ

ಜಯಜಯ ಜಗನ್ನಾಥ ಮಧ್ವನಾಥ || ೧೬ ||

ತುಂಗಕುಲ ಗುರುವರನ ಹೃತ್ಕಮಲದಲಿ ನಿಲಿಸಿ

ಭಂಗವಿಲ್ಲದೆ ಸುಖವ ಸುಜನಕೆಲ್ಲ



ಹಿಂಗದೆ ಕೊಡುವ ನಮ್ಮ ಮಧ್ವಾಂತರಾತ್ಮಕ

ರಂಗವಿಠಲನೆಂದು ನೆರೆ ಸಾರಿರ್ಯೆ || ೧೭ ||

ಜಯ ಜಯ ಜಗತ್ರಾಣ ಜಗದೊಳಗೆ ಸತ್ರಾಣ

ಅಖಿಲಗುಣ ಸದ್ಧಾಮ ಮಧ್ವನಾಮ || ಪ ||

|| ಶ್ರೀಕೃಷ್ಣಾರ್ಪಣಮಸ್ತು ||

ಶ್ರೀಕೃಷ್ಣಾಮೃತ